KA / :G-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜೂನ್ ೧೬, ೨೦೧೧ (ಜ್ಯೇಷ್ಠ ೨೬, ಶಕ ವರ್ಷ ೧೯೩೩) | ಸಂಚಿಕೆ ೨೪ |
|---|---|---|

## ಭಾಗ – ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಕರ್ನಾಟಕ ಲೋಕಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು–560 001**

**ಅಧಿಸೂಚನೆ**

**ಸಂಖ್ಯೆ: ಪಿಎಸ್‌ಸಿ 1 ಆರ್‌ಟಿ(4)ಬಿ–1/2011, ದಿನಾಂಕ: 06–06–2011**

**ಭಾಗ–ಎ**

1. ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ) ನಿಯಮಗಳು 2006 ರನ್ವಯ ಈ ಕೆಳಕಂಡ ತಾಂತ್ರಿಕೇತರ ಹುದ್ದೆಗಳನ್ನು

| ಇಲಾಖೆಯ ಹೆಸರು ಮತ್ತು ಪದನಾಮ | ಹುದ್ದೆಗಳ ಸಂಖ್ಯೆ |
|---|---|
| **ಗ್ರೂಪ್– ' ಬಿ ' ಹುದ್ದೆಗಳು** | |
| 1) ಸಾರಿಗೆ ಇಲಾಖೆಯಲ್ಲಿ ಸಹಾಯಕ ಕಾನೂನು ಅಧಿಕಾರಿ | 02 |
| **ಗ್ರೂಪ್– ' ಸಿ ' ಹುದ್ದೆಗಳು** | |
| 2) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಪರಿವೀಕ್ಷಣಾಧಿಕಾರಿ ದರ್ಜೆ–2 | 54 |
| 3) ಕಾನೂನು ಮಾಪನಶಾಸ್ತ್ರ ಇಲಾಖೆಯಲ್ಲಿ, ಕಾನೂನು ಮಾಪನಶಾಸ್ತ್ರ ನಿರೀಕ್ಷಕರು. | 15 |
| 4) ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಲ್ಲಿ ಸಾಂಖ್ಯಿಕ ನಿರೀಕ್ಷಕರು | 225 |
| 5) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ನಿಲಯ ಮೇಲ್ವಿಚಾರಕರು(ಪುರುಷ) | 64 |
| 6) ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಲ್ಲಿ ನಿಲಯ ಮೇಲ್ವಿಚಾರಕರು(ಮಹಿಳೆ) | 196 |
| 7) ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯದಲ್ಲಿ ಗಣತಿದಾರರು | 30 |
| 8) ಕರ್ನಾಟಕ ಸರ್ಕಾರದ ಸಚಿವಾಲಯದ ಗ್ರಂಥಾಲಯದಲ್ಲಿ ಗ್ರಂಥಾಲಯ ಸಹಾಯಕರು | 06 |

**ಭಾಗ–ಬಿ**

ಹಾಗೂ ಕರ್ನಾಟಕ ರಾಜ್ಯ ನಾಗರೀಕ ಸೇವೆಗಳು(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ತುಂಬದೇ ಇರುವ ಸ್ಥಾನಗಳು) (ವಿಶೇಷ ನೇಮಕಾತಿ) ನಿಯಮಗಳು 2001ರಡಿಯಲ್ಲಿ ಈ ಕೆಳಕಂಡ ಬ್ಯಾಕ್‌ಲಾಗ್ ಹುದ್ದೆಗಳನ್ನು

| ಇಲಾಖೆಯ ಹೆಸರು ಮತ್ತು ಪದನಾಮ | ಹುದ್ದೆಗಳ ಸಂಖ್ಯೆ |
|---|---|
| **ಗ್ರೂಪ್– ' ಬಿ ' ಹುದ್ದೆಗಳು** | |
| 1) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಸಹಾಯಕ ಶಸ್ತ್ರ ಚಿಕಿತ್ಸಕರು (ಅರವಳಿಕೆ ತಜ್ಞರು) | 01 |
| 2) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ತಮಿಳು ಉಪನ್ಯಾಸಕರು | 04 |
| 3) ಬಂದರು, ಒಳನಾಡು ಮತ್ತು ಜಲಸಾರಿಗೆ ಇಲಾಖೆಯಲ್ಲಿ ಕಿರಿಯ ಜಲಮೋಜಣೆದಾರರು | 02 |

ಭರ್ತಿ ಮಾಡಲು ಅರ್ಹ ಅಭ್ಯರ್ಥಿಗಳಿಂದ ಆಯೋಗವು ONLINE ಮೂಲಕ ಅರ್ಜಿಗಳನ್ನು ಆಹ್ವಾನಿಸಿದೆ.

ಅಭ್ಯರ್ಥಿಗಳು ದಿನಾಂಕ: 10–06–2011ರಿಂದ ಆನ್–ಲೈನ್‌ನಲ್ಲಿ ಅರ್ಜಿ ಸಲ್ಲಿಸಬಹುದು.

2. ಅಭ್ಯರ್ಥಿಗಳು ON LINE ಮೂಲಕ ಅರ್ಜಿಗಳನ್ನು ಭರ್ತಿ ಮಾಡಬೇಕು ಹಾಗೂ ಅರ್ಜಿಯನ್ನು ಭರ್ತಿ ಮಾಡುವ ಬಗ್ಗೆ ಸೂಚನೆಗಳನ್ನು ಆಯೋಗದ ವೆಬ್‌ಸೈಟ್‌ನಲ್ಲಿ ಬಿತ್ತರಿಸಲಾಗಿದೆ. ಅರ್ಜಿ ಭರ್ತಿ ಮಾಡುವ ಮುನ್ನ ಅವರ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಹಾಗೂ ಅವರ ಸಹಿಯನ್ನು ಸ್ಕ್ಯಾನ್ ಮಾಡಿ UPLOAD ಮಾಡಲು ಸಿದ್ದವಾಗಿಟ್ಟುಕೊಂಡಿರಬೇಕು. ನಂತರ ಆಯೊಗದ ವೆಬ್ ಸೈಟ್ " http://kpsc.kar.nic.in/ HOME PAGE " ನಲ್ಲಿ " ON LINE APPLICATION " ಅನ್ನು ಕ್ಲಿಕ್ ಮಾಡಿ ಅರ್ಜಿಯನ್ನು ಭರ್ತಿ ಮಾಡಿ ನಂತರ ಶುಲ್ಕವನ್ನು (ಭಾಗ 'ಬಿ'ನಲ್ಲಿರುವ ಬ್ಯಾಕ್‌ಲಾಗ್ ಹುದ್ದೆಗಳನ್ನು ಹೊರತುಪಡಿಸಿ) ಕರ್ನಾಟಕದ ಯಾವುದೇ ಸಿಂಡಿಕೇಟ್ ಬ್ಯಾಂಕಿನ ಶಾಖೆಗಳಲ್ಲಿ ಈ ಸಂಬಂಧ ಮುದ್ರಿತವಾಗುವ ಚಲನ್(ತ್ರಿ ಪ್ರತಿಯಲ್ಲಿ) ಅನ್ನು ಡೌನ್‌ಲೋಡ್ ಮಾಡಿಕೊಂಡು ಶುಲ್ಕ ಪಾವತಿ ಅಥವಾ ಯಾವುದೇ ಎನ್.ಇ.ಎಫ್.ಟಿ. (N.E.F.T) ಸೌಲಭ್ಯವುಳ್ಳ ಇತರೆ ಬ್ಯಾಂಕಿನ ಶಾಖೆಗಳಲ್ಲಿ(ಸಹಕಾರಿ ಬ್ಯಾಂಕ್‌ಗಳನ್ನು ಹೊರತುಪಡಿಸಿ) ಈ ಸಂಬಂಧ ಮುದ್ರಿತವಾಗುವ ಚಲನ್(ದ್ವಿ ಪ್ರತಿಯಲ್ಲಿ) ಅನ್ನು ಡೌನ್‌ಲೋಡ್ ಮಾಡಿಕೊಂಡು ಶುಲ್ಕ ಪಾವತಿಸಬಹುದು.

*ಎನ್.ಇ.ಎಫ್.ಟಿ(NEFT) ಅಂದರೆ ನ್ಯಾಷನಲ್ ಎಲೆಕ್ಟ್ರಾನಿಕ್ ಫಂಡ್ ಟ್ರಾನ್ಸ್‌ಫರ್. ಈ ಸೌಲಭ್ಯವುಳ್ಳ ಯಾವುದೇ ಬ್ಯಾಂಕ್‌ನಿಂದ ಹಣವನ್ನು ಇತರೆ ಬ್ಯಾಂಕ್/ವ್ಯಕ್ತಿ/ಸಂಸ್ಥೆಗೆ ವರ್ಗಾಯಿಸಬಹುದು. ಆದ್ದರಿಂದ ಅಭ್ಯರ್ಥಿಗಳು ಅವರಿಗೆ ಅನುಕೂಲವಾಗುವಂತೆ ಯಾವುದೇ ಎನ್.ಇ.ಎಫ್.ಟಿ(NEFT) ಸೌಲಭ್ಯವುಳ್ಳ ಬ್ಯಾಂಕ್‌ನಲ್ಲಿ ಈ ಸಂಬಂಧ ಮುದ್ರಿತವಾಗುವ ಚಲನ್ ಅನ್ನು ಡೌನ್‌ಲೋಡ್ ಮಾಡಿಕೊಂಡು ಶುಲ್ಕವನ್ನು ಪಾವತಿಸಿ ಅವರ ಚಲನ್ ಪ್ರತಿಯನ್ನು ಇಟ್ಟುಕೊಳ್ಳಬಹುದು. ಈ ಸೌಲಭ್ಯಕ್ಕಾಗಿ ಅಭ್ಯರ್ಥಿಯು ₹.6/–ರ ಸೇವಾ ಶುಲ್ಕವನ್ನು ಪಾವತಿಸಬೇಕಾಗುತ್ತದೆ. ಈ ಸೇವಾ ಶುಲ್ಕವು, ಶುಲ್ಕದೊಂದಿಗೆ ಸೇರಿಸಿ ಚಲನ್‌ನಲ್ಲಿ ಮುದ್ರಿತವಾಗಿರುತ್ತದೆ.

- ➡ ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ: 10–06–2011.
- ➡ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 11–07–2011.
- ➡ ಪರೀಕ್ಷಾ ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ: 12–07–2011.

**ವಿಶೇಷ ಸೂಚನೆ:** On-line ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ (Help line)08202570570, 08202574827, 080–30574957, 30574901, 30574931, 30574940, 30574959,30574910 ಅನ್ನು ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ಕಾಯದೇ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಒಮ್ಮೆ ಪರೀಕ್ಷಾ ಶುಲ್ಕವನ್ನು ಪಾವತಿಸಿದ ನಂತರ ಅದನ್ನು ಯಾವುದೇ ಸಂದರ್ಭದಲ್ಲಿಯೂ ಹಿಂದಿರುಗಿಸಲಾಗುವುದಿಲ್ಲ. ಅಥವಾ ಅದನ್ನು ಇತರೆ ಯಾವುದೇ ಪರೀಕ್ಷೆ ಅಥವಾ ನೇಮಕಾತಿಗಳಿಗೆ ಹೊಂದಿಸಿಕೊಳ್ಳಲಾಗುವುದಿಲ್ಲ.

**ಟಿಪ್ಪಣಿ:** ಅನುಸೂಚಿಯಲ್ಲಿ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಛಿಸಿದಲ್ಲಿ, ಅಂತಹ ಅಭ್ಯರ್ಥಿಗಳು ಪ್ರತಿ ಹುದ್ದೆಗೆ ಪ್ರತ್ಯೇಕವಾಗಿ ಅರ್ಜಿ ಭರ್ತಿ ಮಾಡಿ ಶುಲ್ಕವನ್ನು ಪಾವತಿಸತಕ್ಕದ್ದು.

ಅಭ್ಯರ್ಥಿಗಳು ಅರ್ಜಿ ಭರ್ತಿ ಮಾಡುವ ಮೊದಲು ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು.

**ಹಂತ–1**

ಇತ್ತೀಚಿನ ಭಾವಚಿತ್ರವನ್ನು ಒಂದು ಬಿಳಿ ಹಾಳೆಯ ಮೇಲಿಟ್ಟು ಇದರ ಕೆಳಗೆ ಕಪ್ಪು ಸ್ಕೆಚ್/ ಮಾರ್ಕರ್ ಪೆನ್‌ನಲ್ಲಿ ನಿಮ್ಮ ಸಹಿಯನ್ನು ಮಾಡಿ, ನಿಮ್ಮ ಸಹಿಯು ಭಾವಚಿತ್ರದ ಕೆಳಗೆ ಇರುವ ಬಗ್ಗೆ ಖಚಿತಪಡಿಸಿಕೊಳ್ಳಿ. ಈ ಕೆಳಗೆ ನಮೂದಿಸಿರುವ ತಾಂತ್ರಿಕ ವಿಶಿಷ್ಟತೆಗಳಂತೆ ನಿಮ್ಮ ಭಾವಚಿತ್ರ ಹಾಗೂ ಸಹಿಯನ್ನು ಸ್ಕ್ಯಾನ್ ಮಾಡಿ.

ಕಡತದ ಗಾತ್ರ < 100 KB

ಡಿಪಿಐ ಸೆಟ್ಟಿಂಗ್=100 ಡಿಪಿಐ

ಪ್ರತಿಬಿಂಬದ ಅಳತೆ=100%

ನಿಜ ಬಣ್ಣ

ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಪರಿಮಾಣ ಮತ್ತು ತಾಂತ್ರಿಕ ವಿಶಿಷ್ಟತೆಗಳು:–

45 ಎಂಎಂ(ಎತ್ತರ) X 35 ಎಂಎಂ(ಅಗಲ)

ಸಹಿಯ ಪರಿಮಾಣ

20 ಎಂಎಂ(ಎತ್ತರ) X 35 ಎಂಎಂ(ಅಗಲ)

ನಂತರ ಅಭ್ಯರ್ಥಿಗಳು ಆನ್–ಲೈನ್ (On-line)ನಲ್ಲಿ ಅರ್ಜಿ ಭರ್ತಿ ಮಾಡಲು ಆಯೋಗದ ವೆಬ್‌ಸೈಟ್ "http://kpsc.kar.nic.in" ನ Home page ನಲ್ಲಿ On-line Application for Non-Technical Posts/ On-line Application for Back-Log Posts ಮೇಲೆ ಕ್ಲಿಕ್ ಮಾಡಿದ ನಂತರ ಪರದೆಯಲ್ಲಿ ಪ್ರಕಟವಾಗುವ ಹುದ್ದೆಗಳಿಂದ ಅರ್ಜಿ ಸಲ್ಲಿಸುವ ಹುದ್ದೆಯನ್ನು ಆಯ್ದುಕೊಳ್ಳಬೇಕು. ಹುದ್ದೆಯನ್ನು ಆಯ್ದುಕೊಂಡ ನಂತರ ಹುದ್ದೆಗೆ

ನಿಗದಿಪಡಿಸಿದ ವಿದ್ಯಾರ್ಹತೆಯು ಪರದೆಯಲ್ಲಿ ಪ್ರಕಟವಾಗುತ್ತದೆ. ಈ ವಿದ್ಯಾರ್ಹತೆ ಹೊಂದಿರುವ ಬಗ್ಗೆ ಖಚಿತಪಡಿಸಿಕೊಂಡು, ಅಗತ್ಯ ವಿವರಗಳನ್ನು ಭರ್ತಿ ಮಾಡಿ, ಸ್ಕ್ಯಾನ್ ಮಾಡಿರುವ ಭಾವಚಿತ್ರ/ಸಹಿಯನ್ನು Upload ಮಾಡಬೇಕು. ಪರದೆಯಲ್ಲಿ ನಿಮ್ಮ ಹೆಸರು, ಜನ್ಮ ದಿನಾಂಕ, ಲಿಂಗ, ನಿಮ್ಮ ಅರ್ಜಿಸಂಖ್ಯೆ, ಹುದ್ದೆಯ ಹೆಸರು ಹಾಗೂ Password ಪ್ರಕಟವಾಗುತ್ತದೆ. ಈ ಮಾಹಿತಿಯನ್ನು ಬರೆದಿಟ್ಟುಕೊಂಡು ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಂಡ ನಂತರ ಅರ್ಜಿಯನ್ನು ಭರ್ತಿ ಮಾಡುವುದು.

ಅಭ್ಯರ್ಥಿಗಳಿಗೆ ಅರ್ಜಿ ಭರ್ತಿ ಮಾಡುವ ಸಮಯದಲ್ಲಿ ವಿದ್ಯುತ್ ಕಡಿತಗೊಂಡಲ್ಲಿ ಅಥವಾ ಸರ್ವರ್‌ನಲ್ಲಿ ಏನಾದರೂ ತೊಂದರೆಗಳು ಉಂಟಾದಲ್ಲಿ ಮತ್ತೆ ಅರ್ಜಿ ಭರ್ತಿ ಮಾಡುವ ಕಾರ್ಯವನ್ನು ಮುಂದುವರೆಸಲು ಅವಕಾಶ ಕಲ್ಪಿಸುವುದೇ Password ನೀಡುವ ಉದ್ದೇಶವಾಗಿದೆ.

**ಹಂತ–2**

On-line ನಲ್ಲಿ ಅರ್ಜಿಯನ್ನು ಭರ್ತಿ ಮಾಡಿದ ನಂತರ Save and Continue ಬಟನ್ ಮೇಲೆ ಕ್ಲಿಕ್ ಮಾಡಿದ ಕೂಡಲೇ ಅಭ್ಯರ್ಥಿಯು ಅರ್ಜಿಯಲ್ಲಿ ಭರ್ತಿ ಮಾಡಿದ ಎಲ್ಲಾ ವಿವರಗಳು ಪರದೆಯ ಮೇಲೆ ಮೂಡುತ್ತವೆ. ಪರದೆಯ ಮೇಲೆ ಮೂಡಿದ ಕೂಡಲೇ ಎಲ್ಲಾ ವಿವರಗಳನ್ನು ಮತ್ತೊಮ್ಮೆ ಪರಿಶೀಲಿಸಿ, ಏನಾದರೂ ತಪ್ಪುಗಳಾಗಿದ್ದಲ್ಲಿ ಅದನ್ನು ಸರಿಪಡಿಸಲು edit ಮೇಲೆ ಕ್ಲಿಕ್ ಮಾಡಿ ನಂತರ ಅಗತ್ಯ ತಿದ್ದುಪಡಿಗಳನ್ನು ಮಾಡಬಹುದು. ಆನಂತರ ಅರ್ಜಿಯಲ್ಲಿ ಭರ್ತಿ ಮಾಡಿರುವ ಎಲ್ಲಾ ವಿವರಗಳು ಸರಿಯಾಗಿರುತ್ತವೆಯೆಂದು ಮನದಟ್ಟು ಮಾಡಿಕೊಂಡು, ನಂತರ Submit ಕ್ಲಿಕ್ ಮಾಡಿದಲ್ಲಿ ಶುಲ್ಕ ಪಾವತಿಸುವ ಆಯ್ಕೆಗಳು ಪ್ರಕಟವಾಗುತ್ತವೆ. ಸಿಂಡಿಕೇಟ್ ಬ್ಯಾಂಕ್‌ಗಳಲ್ಲಿ ಶುಲ್ಕ ಪಾವತಿಸಲು ಅಥವಾ ಎನ್.ಇ.ಎಫ್.ಟಿ. ಸೌಲಭ್ಯವುಳ್ಳ ಇತರೆ ಬ್ಯಾಂಕ್‌ಗಳಲ್ಲಿ ಶುಲ್ಕ ಪಾವತಿಸಲು (ಬ್ಯಾಕ್ ಲಾಗ್ ಹುದ್ದೆಗಳನ್ನು ಹೊರತುಪಡಿಸಿ) ಚಲನ್ Print ಆಗುತ್ತದೆ. ಈ ಚಲನ್ ಅನ್ನು ಡೌನ್‌ಲೋಡ್ ಮಾಡಿಕೊಳ್ಳಬೇಕು. ನಂತರ Print Pre-view ಬಟನ್ ಅನ್ನು ಕ್ಲಿಕ್ ಮಾಡಿ ನೀವು ಭರ್ತಿ ಮಾಡಿರುವ ಅರ್ಜಿಯ ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಳ್ಳುವುದು. ನಂತರ ಸಂಬಂಧಿತ ಬ್ಯಾಂಕ್‌ಗಳಲ್ಲಿ ಶುಲ್ಕ ಪಾವತಿಸತಕ್ಕದ್ದು. ಒಮ್ಮೆ Submit ಬಟನ್ ಅನ್ನು ಕ್ಲಿಕ್ ಮಾಡಿದ ನಂತರ ಅರ್ಜಿಯಲ್ಲಿ ಯಾವುದೇ ತಿದ್ದುಪಡಿಗಳನ್ನು ಮಾಡಲು ಅವಕಾಶವಿರುವುದಿಲ್ಲ. ಆದ್ದರಿಂದ ಅಭ್ಯರ್ಥಿಗಳು ಜಾಗರೂಕತೆಯಿಂದ ಅವರು ಭರ್ತಿ ಮಾಡಿರುವ ವಿವರಗಳನ್ನು ಪರಿಶೀಲಿಸಿದ ನಂತರವೇ Submit ಬಟನ್ ಅನ್ನು ಕ್ಲಿಕ್ ಮಾಡತಕ್ಕದ್ದು.

ನೀವು Password ಇರುವ ಪುಟದ ಪ್ರತಿಯನ್ನು, ಭರ್ತಿ ಮಾಡಿರುವ ಅರ್ಜಿಯ ಡೌನ್‌ಲೋಡೆಡ್ ಪ್ರತಿಯನ್ನು ಹಾಗೂ ಶುಲ್ಕ ಪಾವತಿಸಿದ ನಿಮ್ಮ ಪ್ರತಿಯ ಚಲನ್ ಅನ್ನು ಸ್ವೀಕೃತಿಯಂತೆ (ಬ್ಯಾಕ್‌ಲಾಗ್ ಹುದ್ದೆಗಳಿಗೆ Password ಇರುವ ಪುಟದ ಪ್ರತಿ ಹಾಗೂ ಭರ್ತಿ ಮಾಡಿರುವ ಅರ್ಜಿಯ ಡೌನ್‌ಲೋಡೆಡ್ ಪ್ರತಿ ಮಾತ್ರ) ನೇಮಕಾತಿ ಪ್ರಕ್ರಿಯೆ ಮುಗಿಯುವವರೆಗೂ ಜಾಗರೂಕತೆಯಿಂದ ನಿಮ್ಮಲ್ಲಿ ಇಟ್ಟುಕೊಳ್ಳತಕ್ಕದ್ದು.

ನಿಮ್ಮ ಅರ್ಜಿಯ ಸ್ವೀಕೃತಿ ಬಗ್ಗೆ ಖಚಿತಪಡಿಸಿಕೊಳ್ಳಬೇಕಾದಲ್ಲಿ ಶುಲ್ಕ ಪಾವತಿಸಿದ 2 ದಿನಗಳ ನಂತರ (ತಾಂತ್ರಿಕೇತರ ಹುದ್ದೆಗಳಿಗೆ) ಆಯೋಗದ Home page ನಲ್ಲಿ On-line Application for Non-Technical Posts/ On-line Application for Back-Log Post ಮೇಲೆ ಕ್ಲಿಕ್ ಮಾಡಿ, ನಿಮಗೆ ನೀಡಲಾದ Password ಅನ್ನು ನೀಡಿ Status ಬಟನ್ ಅನ್ನು ಕ್ಲಿಕ್ ಮಾಡಿದಲ್ಲಿ ನಿಮ್ಮ ಅರ್ಜಿಯ ಸ್ವೀಕೃತಿ ಬಗ್ಗೆ ಖಚಿತಪಡಿಸಿಕೊಳ್ಳಬಹುದು.

**3.ಶುಲ್ಕ, ಶುಲ್ಕ ಪಾವತಿಸಬೇಕಾದ ವಿಧಾನ ಹಾಗೂ ಸ್ಥಳದ ವಿವರ:–**

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | ರೂ.300/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1 ಮತ್ತು ಅಂಗವಿಕಲ ಹಾಗೂ ಮಾಜಿ ಸೈನಿಕ ಅಭ್ಯರ್ಥಿಗಳಿಗೆ | ರೂ.25/– |

3.1 ದಿನಾಂಕ: 10–06–2011 ರಿಂದ ಅರ್ಜಿಗಳನ್ನು ON LINE ಮೂಲಕ ಭರ್ತಿ ಮಾಡಿ ಶುಲ್ಕವನ್ನು ಕೆಳಕಂಡಂತೆ ಪಾವತಿಸಬಹುದು. ಈ ಕೆಳಗೆ ನಿಗದಿಪಡಿಸಿದ ಯಾವುದಾದರು ಒಂದು ಮಾದರಿಯಲ್ಲಿ ಮಾತ್ರ ಶುಲ್ಕವನ್ನು ಪಾವತಿಸತಕ್ಕದ್ದು. ಇವುಗಳನ್ನು ಹೊರತುಪಡಿಸಿ ಇತರೇ ಸಹಕಾರಿ ಬ್ಯಾಂಕ್ / ಬ್ಯಾಂಕಿನ ಶಾಖೆಗಳಲ್ಲಿ ಶುಲ್ಕ ಸಂದಾಯ ಮಾಡಿದ್ದಲ್ಲಿ ಪರಿಗಣಿಸಲಾಗುವುದಿಲ್ಲ ಹಾಗೂ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(ಅ) ಯಾವುದೇ ಸಿಂಡಿಕೇಟ್ ಬ್ಯಾಂಕಿನ ಶಾಖೆಗಳಲ್ಲಿ ಚಲನ್ ನೀಡಿ ಹಣ ಪಾವತಿಸಬಹುದು.

(ಆ) ಯಾವುದೇ ಇತರೇ ಬ್ಯಾಂಕಿನ ಶಾಖೆಗಳಲ್ಲಿ (ಸಹಕಾರಿ ಬ್ಯಾಂಕ್‌ಗಳನ್ನು ಹೊರತುಪಡಿಸಿ) ಎನ್.ಇ.ಎಫ್.ಟಿ. ಚಲನ್ ನೀಡಿ ಹಣ ಪಾವತಿಸಬಹುದು.

ಅಭ್ಯರ್ಥಿಗಳು ಆನ್‌ಲೈನ್ ಅರ್ಜಿ ಭರ್ತಿ ಮಾಡಿದ ನಂತರ ಎಲ್ಲಾ ವಿವರಗಳು ಕ್ರಮಬದ್ಧವಾಗಿವೆಯೇ ಎಂದು ಖಚಿತಪಡಿಸಿಕೊಂಡು ಅರ್ಜಿಯ ಪ್ರತಿ(Preview)ಯನ್ನು ಡೌನ್ ಲೋಡ್ ಮಾಡಿಕೊಂಡು ಶುಲ್ಕ ಪಾವತಿ ಮಾಡುವ ಮಾದರಿಯನ್ನು ಆಯ್ದುಕೊಳ್ಳಬೇಕು. ಅವರು ಆಯ್ದುಕೊಂಡ ಮಾದರಿಯ ಅನುಸಾರ ಚಲನ್ (ತ್ರಿ ಪ್ರತಿಯಲ್ಲಿ) ಪರದೆಯ ಮೇಲೆ ಪ್ರಕಟಗೊಳ್ಳುವುದು. ಈ ಚಲನ್‌ನ ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಂಡು ನಿಗದಿಪಡಿಸಿದ ಬ್ಯಾಂಕ್‌ಗಳಲ್ಲಿ ಶುಲ್ಕವನ್ನು ಪಾವತಿಸಿ ಅಭ್ಯರ್ಥಿಯ ಪ್ರತಿಯನ್ನು ಸ್ವೀಕೃತಿಯಂತೆ ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೂ ಭದ್ರವಾಗಿ ಇಟ್ಟುಕೊಳ್ಳುವುದು.

**4. ಅರ್ಹತಾ ಷರತ್ತುಗಳು:–**

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

**5. ತಾಂತ್ರಿಕೇತರ ಹುದ್ದೆಗಳ ನೇಮಕಾತಿ ವಿಧಾನ:–ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಸಂದರ್ಶನ ಮೂಲಕ ಆಯ್ಕೆ**

ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006 ರಲ್ಲಿ ನಿರ್ದಿಷ್ಟಪಡಿಸಲಾದಂತೆ, ಆಯೋಗದಿಂದ ಅಧಿಸೂಚಿಸಲಾಗಿರುವ ಯಾವುದೇ ತಾಂತ್ರಿಕೇತರ ಹುದ್ದೆಗಳ ಸಂದರ್ಶನಕ್ಕೆ ಅರ್ಹರಾಗಲು ಅಭ್ಯರ್ಥಿಗಳು ಎಸ್.ಎಸ್.ಎಲ್.ಸಿ.ಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳಿಗೆ ಪರೀಕ್ಷೆ ನಡೆಸಲಿದ್ದು, ಅದರಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಸಂದರ್ಶನಕ್ಕೆ ಅರ್ಹರಾಗುವುದಿಲ್ಲ ಹಾಗೂ ಈ ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

ಆದರೆ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ವಿನಾಯಿತಿ ಬಗ್ಗೆ ಕೆಳಕಂಡ ಷರತ್ತುಗಳನ್ನು ಸೇರ್ಪಡಿಸಲಾಗಿರುತ್ತದೆ.

"ಎಸ್.ಎಸ್.ಎಲ್.ಸಿ. ಅಥವಾ ಇದಕ್ಕೆ ತತ್ಸಮಾನವೆಂದು ರಾಜ್ಯ ಸರ್ಕಾರದಿಂದ ಘೋಷಿಸಲ್ಪಟ್ಟ ಇತರೆ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ.ಪರೀಕ್ಷೆಗಿಂತ ಮೇಲ್ಮಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆಯಾಗಿ, ಅಥವಾ ದ್ವಿತೀಯ ಭಾಷೆಯಾಗಿ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿರುವ ಅಥವಾ ಕರ್ನಾಟಕ ಲೋಕ ಸೇವಾ ಆಯೋಗದಿಂದ ಇದೇ ನಿಯಮಗಳಡಿಯಲ್ಲಿ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷೆ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಅಭ್ಯರ್ಥಿಗಳು, ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದರಿಂದ ವಿನಾಯಿತಿ ಹೊಂದಿರುತ್ತಾರೆ".

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಿಂದ ವಿನಾಯಿತಿ ಪಡೆಯಲು ಅರ್ಜಿಯ ನಿಗದಿತ ಸ್ಥಳದಲ್ಲಿ ವಿವರಗಳನ್ನು ನೀಡತಕ್ಕದ್ದು. ಸರಿಯಾದ ಮಾಹಿತಿ ಒದಗಿಸದಿದ್ದಲ್ಲಿ ಮೇಲಿನ ವಿನಾಯಿತಿಗಳನ್ನು ಪಡೆಯಲು ಅರ್ಹತೆ ನೀಡುವುದಿಲ್ಲ.

**ವಿ.ಸೂ:–** ಎಸ್.ಎಸ್.ಎಲ್.ಸಿ.ಯಲ್ಲಿ ಕನ್ನಡ ಭಾಷೆಯನ್ನು ತೃತೀಯ ಭಾಷೆಯನ್ನಾಗಿ ಅಭ್ಯಸಿಸಿರುವ ಅಭ್ಯರ್ಥಿಗಳಿಗೆ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಿಂದ ವಿನಾಯಿತಿ ಇರುವುದಿಲ್ಲ.

ಸ್ಪರ್ಧಾತ್ಮಕ ಪರೀಕ್ಷಾ ವಿಧಾನ : ಸ್ಪರ್ಧಾತ್ಮಕ ಪರೀಕ್ಷೆಯು ಕೆಳಕಂಡ ಎರಡು ಪತ್ರಿಕೆಗಳನ್ನೊಳಗೊಂಡಿದ್ದು

ವಸ್ತು ನಿಷ್ಠ ಬಹು ಆಯ್ಕೆ (Objective Multiple Choice) ಮಾದರಿಯದಾಗಿರುತ್ತದೆ.

ಪತ್ರಿಕೆ – 1 (ಸಾಮಾನ್ಯ ಪತ್ರಿಕೆ) (General Paper) 200 ಅಂಕಗಳು – 1½ ಘಂಟೆ

(ನಿಗದಿಪಡಿಸಿದ ಅರ್ಹತಾ ಪರೀಕ್ಷೆಯಲ್ಲಿ ಉತ್ತೀರ್ಣನಾದ ಒಬ್ಬ ವ್ಯಕ್ತಿಯಿಂದ ನಿರೀಕ್ಷಿಸಬಹುದಾದ ಸಾಮಾನ್ಯಜ್ಞಾನಕ್ಕೆ ಸಂಬಂಧಪಟ್ಟ ವಿಷಯಗಳಾದ ಪ್ರಚಲಿತ ವಿದ್ಯಮಾನಗಳು, ಸಾಮಾನ್ಯ ವಿಜ್ಞಾನಗಳು, ಭಾರತದ ಇತಿಹಾಸ, ಭಾರತದ ಭೂಗೋಳ, ಸಮಾಜ ವಿಜ್ಞಾನ, ಪ್ರತಿ ದಿನ ಗಮನಿಸುವ ವಿಷಯಗಳು, ಪ್ರಯೋಗಿಕ ಜ್ಞಾನ ಮತ್ತು ಸಾಮಾನ್ಯ ಬೌದ್ಧಿಕ ಸಾಮರ್ಥ್ಯಗಳನ್ನು ಒಳಗೊಂಡಿರುವ ಸಾಮಾನ್ಯ ಪತ್ರಿಕೆ).

ಪತ್ರಿಕೆ – 2 ( ನಿರ್ದಿಷ್ಟ ಪತ್ರಿಕೆ ) (Specific Paper) – 200 ಅಂಕಗಳು – 2 ಘಂಟೆ

**ಸೂಚನೆ–** 1) ಕನ್ನಡ ಕಡ್ಡಾಯ ಭಾಷಾ ಪರೀಕ್ಷೆ ಹಾಗೂ ಸ್ಪರ್ಧಾತ್ಮಕ ಪರೀಕ್ಷೆ ಬಗ್ಗೆ ಪಠ್ಯಕ್ರಮವನ್ನು ಆಯೋಗದ ವೆಬ್ ಸೈಟ್ "http://kpsc.kar.nic.in/SYLLABUS " ನಲ್ಲಿ ಬಿತ್ತರಿಸಲಾಗಿದೆ.

ಸ್ಪರ್ಧಾತ್ಮಕ ಪರೀಕ್ಷೆಯ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲೂ ಇರುತ್ತದೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಅಭ್ಯರ್ಥಿಗಳು ಆಂಗ್ಲ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು.

**ಟಿಪ್ಪಣಿ:–** ಪ್ರಶ್ನೆ ಪತ್ರಿಕೆ ಬಗ್ಗೆ ಯಾವುದೇ ಬಗೆಯ ಆಕ್ಷೇಪಣೆ ಇದ್ದಲ್ಲಿ, ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಪರೀಕ್ಷಾ ದಿನವೇ ಸಂಬಂಧಿತ ಮೇಲ್ವಿಚಾರಕರ ಮುಖಾಂತರ ಅಭ್ಯರ್ಥಿಯ ಹೆಸರು, ವಿಳಾಸ, ನೋಂದಣಿ ಸಂಖ್ಯೆ ಇತ್ಯಾದಿಗಳನ್ನು ನಮೂದಿಸಿರುವ ಲಿಖಿತ ಮನವಿಯನ್ನು ಆಯೋಗಕ್ಕೆ ಸಲ್ಲಿಸಿ ಸ್ವೀಕೃತಿ (Acknowledgement) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ.

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಅರ್ಹರಾದ ನಂತರ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006ರ ಉಪನಿಯಮ 6(ಬಿ)ರನ್ವಯ ಅಭ್ಯರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡವಾರು ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ 1:3 ಅನುಪಾತದಲ್ಲಿ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಆಹ್ವಾನಿಸಲಾಗುವುದು. ಅಭ್ಯರ್ಥಿಗಳು ಪರೀಕ್ಷೆಗೆ/ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

ಸಂದರ್ಶನ ನಡೆಸುವ ಉದ್ದೇಶ ಎಂದರೆ ಅಭ್ಯರ್ಥಿಗಳು ಆಯ್ಕೆ ಬಯಸಿದ ಹುದ್ದೆಗೆ ಅವರ ಅರ್ಹತೆ, ವ್ಯಕ್ತಿತ್ವ, ಸಂಬಂಧಿತ ವಿಷಯದಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯತೆ, ಸೂಕ್ಷ್ಮತೆ ಮತ್ತು ಕರ್ತೃತ್ವ ಶಕ್ತಿ, ಸಾಮಾನ್ಯ ಜ್ಞಾನ ಹಾಗೂ ವಿಷಯದಲ್ಲಿನ ಪರಿಜ್ಞಾನ ಹಾಗೂ ಇನ್ನಿತರ ವಿಶೇಷ ಗುಣಗಳನ್ನು ನಿರ್ಧರಿಸುವುದಾಗಿರುತ್ತದೆ.

**ಸಂದರ್ಶನಕ್ಕೆ ನಿಗದಿಪಡಿಸಿದ ಗರಿಷ್ಠ ಅಂಕಗಳು:–** ಸ್ಪರ್ಧಾತ್ಮಕ ಪರೀಕ್ಷೆಗೆ ನಿಗದಿಪಡಿಸಿದ ಒಟ್ಟು ಅಂಕಗಳ ಶೇಕಡ 12.5 ಅಂಕಗಳು ಆಯೋಗವು ನಿಯಮಾನುಸಾರ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸಿದ ಅಂಕಗಳ ಶೇಕಡವಾರರ ಜೇಷ್ಠತೆಯನ್ನು ಆಧರಿಸಿ ಹಾಗೂ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಹುದ್ದೆಗಳ ನೇಮಕಾತಿಗಾಗಿ ಇರುವ ಮೀಸಲಾತಿಯನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ ಅಭ್ಯರ್ಥಿಗಳನ್ನು ಅಯ್ಕೆ ಮಾಡುತ್ತದೆ.

**6. ಶೈಕ್ಷಣಿಕ ವಿದ್ಯಾರ್ಹತೆ ಮತ್ತು ವಯೋಮಿತಿ:–**

**6.1 ಶೈಕ್ಷಣಿಕ ವಿದ್ಯಾರ್ಹತೆ:–** ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಆಯಾ ಹುದ್ದೆಯ ಮುಂದೆ ಸೂಚಿಸಿರುವ ಕನಿಷ್ಠ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು. ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೇ, ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿದ್ದರೂ ಸಹ ಪರಿಗಣಿಸಲಾಗುವುದಿಲ್ಲ.

**6.2 ವಯೋಮಿತಿ:–** ಅನುಸೂಚಿಯಲ್ಲಿ ಆಯಾ ಹುದ್ದೆಯ ಮುಂದೆ ಸೂಚಿಸಿದಂತೆ, ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ ವಯೋಮಿತಿಯನ್ನು ಹೊಂದಿರಬೇಕು ಹಾಗೂ ನಿಗದಿತ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು.

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು.

(ಅ) ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಆಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಆ) ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವನು ಕೇಂದ್ರ ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. (ಈ ಉಪ ಕಂಡಿಕೆಗೆ ಸಂಬಂಧಿಸಿದ ವಿವರಣೆಗಳಿಗೆ ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮಗಳು 2 ಮತ್ತು 9 ರನ್ವಯ ಅರ್ಥೈಸಿಕೊಳ್ಳುವುದು)

(ಇ) ಅಭ್ಯರ್ಥಿಗಳು ನ್ಯಾಷನಲ್ ಕ್ಯಾಡೆಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂಥ ಕ್ಯಾಡೆಟ್ ಪರಿವೀಕ್ಷಕನಾಗಿ ಅವನು ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಈ) ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅವನು / ಅವಳು ಅಂತಹ ಗ್ರಾಮ ಪರಿಶೀಲಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು.

(ಉ) ಅಭ್ಯರ್ಥಿಯು ಅಂಗವಿಕಲನಾಗಿದ್ದರೆ 10 ವರ್ಷಗಳು

(ಊ) ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಆವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

(ಋ) ಅಭ್ಯರ್ಥಿಯು ವಿಧವೆಯಾಗಿದ್ದಲ್ಲಿ 10 ವರ್ಷಗಳು.

(ೠ) ಅಭ್ಯರ್ಥಿಯು ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ 10 ವರ್ಷಗಳು.

ಉಪ ಕಂಡಿಕೆ 6.2.(ೠ) ರ ಮೇರೆಗೆ ವಯೋಮಿತಿಯ ಸಡಿಲಿಕೆಯನ್ನು ಕೋರುವ ಅಭ್ಯರ್ಥಿಯು ಜೀತ ಕಾರ್ಮಿಕ ನಾಗಿದ್ದು, ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದಿಟ್ಟುಕೊಂಡಿರಬೇಕು.

**7. ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು :–**

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು:–

ಅ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ 'ಡಿ' ರಲ್ಲಿ

ಆ) ಪ್ರವರ್ಗ–1 ಕ್ಕೆ ಸೇರಿದ ಅಭ್ಯರ್ಥಿಗಳು ನಮೂನೆ ' ಇ ' ರಲ್ಲಿ

ಇ) ಪ್ರವರ್ಗ–2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ನಮೂನೆ ' ಎಫ್ ' ರಲ್ಲಿ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಆಯೋಗವು ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಸೂಚಿಸಿದಾಗ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ನಿಯಮಾನುಸಾರ ಸಾಮಾನ್ಯ ಅರ್ಹತೆಯಡಿಯಲ್ಲಿ ಪರಿಗಣಿಸಲಾಗುವುದು. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು) (ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದು).

**8. ಗ್ರಾಮೀಣ ಅಭ್ಯರ್ಥಿ:–**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 08 ಸೇನೇನಿ 2001 ದಿನಾಂಕ:13–02–2001 ರನ್ವಯ ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು.

* ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2ನ್ನು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜುವಿನೊಂದಿಗೆ ಹಾಗೂ ಈ ಪ್ರಮಾಣ ಪತ್ರವಲ್ಲದೇ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು.

* ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ–2ರಲ್ಲಿ ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜು ಪಡೆದಿಟ್ಟುಕೊಂಡಿರತಕ್ಕದ್ದು.

* ಆಯೋಗವು ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಸೂಚಿಸಿದಾಗ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಗ್ರಾಮೀಣ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಇತರೆ ನಮೂನೆಗಳಲ್ಲಿ ಸಲ್ಲಿಸಲ್ಪಡುವ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು ಹಾಗೂ ಅಂತಹವರು ಗ್ರಾಮೀಣ ಮೀಸಲಾತಿಗೆ ಅನರ್ಹರಾಗುತ್ತಾರೆ. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ.)

**9. ಕನ್ನಡ ಮಾಧ್ಯಮ ಅಭ್ಯರ್ಥಿ:–**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ 71 ಸೇನೇನಿ 2001 ದಿನಾಂಕ 24–10–2002 ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದಿಟ್ಟುಕೊಂಡಿರತಕ್ಕದ್ದು. ಆಯೋಗವು ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಸೂಚಿಸಿದಾಗ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಕನ್ನಡ ಮಾಧ್ಯಮ ಅಭ್ಯರ್ಥಿ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರದ ನಮೂನೆಯನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ)

**10. ಅಂಗವಿಕಲ ಅಭ್ಯರ್ಥಿ:–**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ 03–09–2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ–'ಎ' ಮತ್ತು 'ಬಿ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು (ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 21 ಎಸ್‌ಆರ್‌ಆರ್ 2008 ದಿನಾಂಕ 03–08–2009ರ ಅನುಸೂಚಿಯಡಿ ಸೇರ್ಪಡೆ ಮಾಡಲಾಗಿರುವ ಇಲಾಖೆಗಳು) ಮತ್ತು ಸಮೂಹ 'ಸಿ' ಗುಂಪಿನ ಹುದ್ದೆಗಳಿಗೆ ಶೇಕಡ 5 ರಷ್ಟು(ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 52 ಎಸ್‌ಆರ್‌ಆರ್ 99 ದಿನಾಂಕ: 29–11–2002ರ ಅನುಸೂಚಿಯಡಿ ಸೇರ್ಪಡಿಸಲಾಗಿರುವ ಇಲಾಖೆಗಳು) ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೇನೇನಿ 2005 ದಿನಾಂಕ: 19–11–2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಸಂದರ್ಶನಕ್ಕೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ ಮೂಲ ಪ್ರಮಾಣ ಪತ್ರಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಅಂಗವಿಕಲ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲು ಬರುವುದಿಲ್ಲ. ಈ ಪ್ರಮಾಣ ಪತ್ರದ ನಮೂನೆಯನ್ನು ಈ ಸೂಚನೆಗಳಿಗೆ ಅನುಬಂಧಿಸಲಾಗಿದೆ. ಮೀಸಲಾತಿ ಪ್ರಮಾಣ ಪತ್ರ ಜಾರಿ ಮಾಡಿದ ದಿನಾಂಕವನ್ನು ತಪ್ಪದೇ ಅರ್ಜಿಯ ಸಂಬಂಧಪಟ್ಟ ಅಂಕಣದಲ್ಲಿ ನಮೂದಿಸತಕ್ಕದ್ದು.

ಈಗ ಅಧಿಸೂಚಿಸಿರುವ ತಾಂತ್ರಿಕೇತರ ಹುದ್ದೆಗಳಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯ ನಿಲಯ ಮೇಲ್ವಿಚಾರಕರ ಹುದ್ದೆಗಳನ್ನು ದಿನಾಂಕ: 29–11–2002ರ ಅಧಿಸೂಚನೆಯಲ್ಲಿ ಗುರುತಿಸಲಾಗಿರುವುದರಿಂದ ಈ ಹುದ್ದೆಗಳಲ್ಲಿ ಅಂಗವಿಕಲರಿಗೆ ಮೀಸಲಿದ್ದ ಹುದ್ದೆಗಳಿಗೆ ಶ್ರವಣದೋಷ/ ಚಲನವಲನ ವೈಕಲ್ಯ/ ಮಾನಸಿಕ ಅಸ್ವಸ್ಥ/ ಕುಷ್ಠರೋಗದಿಂದ ಗುಣಮುಖರಾದವರು ಮಾತ್ರ ಅರ್ಜಿ ಸಲ್ಲಿಸಬಹುದು. ಅಂಧ/ದೃಷ್ಟಿಮಾಂದ್ಯ ಹಾಗೂ ಬುದ್ಧಿಮಾಂದ್ಯ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವಂತಿಲ್ಲ.

**11. ಯೋಜನೆಗಳಿಂದ ನಿರಾಶ್ರಿತ ಅಭ್ಯರ್ಥಿ:–**

ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 23 ಸೆನೆನಿ 99 ದಿನಾಂಕ 23–11–2000 ರನ್ವಯ ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು (ಗ್ರೂಪ್ 'ಸಿ' ಹುದ್ದೆಗಳಿಗೆ ಮಾತ್ರ) ಕೋರುವ ಅಭ್ಯರ್ಥಿಗಳು ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದಿಟ್ಟುಕೊಂಡಿರತಕ್ಕದ್ದು. ಆಯೋಗವು ಮೂಲ ದಾಖಲಾತಿಗಳನ್ನು ಪರಿಶೀಲನೆಗೆ ಸೂಚಿಸಿದಾಗ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ.)

12. ಕಡ್ಡಾಯ ಕನ್ನಡ ಭಾಷಾ / ಸ್ಪರ್ಧಾತ್ಮಕ ಪರೀಕ್ಷೆಗಳನ್ನು ಬೆಂಗಳೂರು / ಮೈಸೂರು / ಬೆಳಗಾಂ / ಗುಲ್ಬರ್ಗಾ / ಶಿವಮೊಗ್ಗ ವಿಭಾಗೀಯ ಕೇಂದ್ರದಲ್ಲಿ ಹಾಗೂ ಆಯೋಗವು ನಿಗದಿಪಡಿಸಿರುವ ಇತರೆ ಯಾವುದೇ ಕೇಂದ್ರ ಸ್ಥಳದಲ್ಲಿ ನಡೆಸಲಾಗುವುದು. ಅಭ್ಯರ್ಥಿಗಳು ಅರ್ಜಿ ನಮೂನೆಯಲ್ಲಿ ಅವರು ಸ್ಪರ್ಧಾತ್ಮಕ ಪರೀಕ್ಷೆ ತೆಗೆದುಕೊಳ್ಳಲು ಇಚ್ಛಿಸುವ ವಿಭಾಗೀಯ ಕೇಂದ್ರವನ್ನು ನಮೂದಿಸತಕ್ಕದ್ದು. ಪರೀಕ್ಷಾ ಕೇಂದ್ರವನ್ನು ನಿಗದಿಪಡಿಸುವುದು ಆಯೋಗದ ಅಂತಿಮ ತೀರ್ಮಾನವಾಗಿರುತ್ತದೆ. ಸಂದರ್ಶನ / ಪರೀಕ್ಷೆಗಳ ದಿನಾಂಕವನ್ನು ಮುಂದೆ ಪ್ರಕಟಿಸಲಾಗುವುದು ಹಾಗೂ ಆಯೋಗದ ವೆಬ್ ಸೈಟ್ "http://kpsc.kar.nic in/ notification" ನಲ್ಲಿಯೂ ಬಿತ್ತರಿಸಲಾಗುವುದು.

ತಾಂತ್ರಿಕೇತರ ಹುದ್ದೆಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಯನ್ನು ತಾತ್ಕಾಲಿಕವಾಗಿ (Tentatively) ಸೆಪ್ಟೆಂಬರ್–ಅಕ್ಟೋಬರ್ 2011ರಲ್ಲಿ ನಡೆಸಲು ಉದ್ದೇಶಿಸಿದೆ.

**13. ಆಯೋಗದೊಡನೆ ಪತ್ರ ವ್ಯವಹಾರ:–**

ಆಯೋಗವು ಅಭ್ಯರ್ಥಿಗಳೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸುವುದಿಲ್ಲ. ಆದಾಗ್ಯೂ ಅಭ್ಯರ್ಥಿಗೆ ಸ್ಪರ್ಧಾತ್ಮಕ ಪರೀಕ್ಷೆಯ ಪ್ರವೇಶ ಪತ್ರ / ಸಂದರ್ಶನಕ್ಕೆ ಸೂಚನೆ ಪತ್ರ ಬಾರದಿದ್ದಲ್ಲಿ, ಅಭ್ಯರ್ಥಿಯು ಆಯೋಗದ ಕಛೇರಿಯನ್ನು ಖುದ್ದಾಗಿ ಸಂಪರ್ಕಿಸತಕ್ಕದ್ದು. ಸ್ಪರ್ಧಾತ್ಮಕ ಪರೀಕ್ಷೆಗೆ ಅರ್ಹರಾದ ಅಭ್ಯರ್ಥಿಗಳು ಪ್ರವೇಶ ಪತ್ರ ಬಾರದಿದ್ದಲ್ಲಿ ಆಯೋಗದ ಅಂತರ್ಜಾಲದಿಂದ ಡೌನ್‌ಲೋಡ್ ಮಾಡಿಕೊಳ್ಳತಕ್ಕದ್ದು. ಸಂದರ್ಶನಕ್ಕೆ ಅನುಮತಿಸಲಾದ ಅಭ್ಯರ್ಥಿಯಾಗಿದ್ದರೆ ಸಂದರ್ಶನ ಪತ್ರದ ನಕಲನ್ನು ನೀಡಲಾಗುವುದು.

ವಿಳಾಸ ಬದಲಾವಣೆ ಇದ್ದಲ್ಲಿ ಅಭ್ಯರ್ಥಿಗಳು ಲಿಖಿತ ಮೂಲಕ ಆಯೋಗದ ಗಮನಕ್ಕೆ ತರತಕ್ಕದ್ದು. ಈ ವಿಳಾಸ ಬದಲಾವಣೆಯನ್ನು ಪರಿಗಣಿಸಲು ಆಯೋಗವು ಪ್ರಯತ್ನಿಸುವುದು. ಆದಾಗ್ಯೂ ಈ ವಿಚಾರದಲ್ಲಿ ಆಯೋಗವು ಯಾವುದೇ ಜವಾಬ್ದಾರಿಯನ್ನು ವಹಿಸಿಕೊಳ್ಳುವುದಿಲ್ಲ. ಈ ಬಗ್ಗೆ ಅಭ್ಯರ್ಥಿಗಳು ಎಚ್ಚರ ವಹಿಸತಕ್ಕದ್ದು. ಅಭ್ಯರ್ಥಿಗಳು ಆಯೋಗದೊಡನೆ ಸಂಪರ್ಕಿಸಲೇಬೇಕಾದ ಸಂದರ್ಭದಲ್ಲಿ ತಮ್ಮ ಮನವಿಯಲ್ಲಿ ಕೆಳಕಂಡ ಮಾಹಿತಿಗಳು ಒಳಗೊಂಡಿರಬೇಕು:–

(i) ಹುದ್ದೆಯ / ವಿಷಯದ ಹೆಸರು

(ii) ಅಭ್ಯರ್ಥಿಯ ಪೂರ್ಣ ಹೆಸರು (ಬಿಡಿ ಅಕ್ಷರಗಳಲ್ಲಿ)

(iii) ಅರ್ಜಿಯಲ್ಲಿ ನಮೂದಿಸಿರುವ ಅಂಚೆ ವಿಳಾಸ

**14. ಪ್ರಮುಖವಾದ ಸೂಚನೆಗಳು:–**

ಅಭ್ಯರ್ಥಿಯ ಇತ್ತೀಚಿನ ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಒಂದು ಹಾಳೆಯ ಮೇಲಿಟ್ಟು ಅದರ ಕೆಳಗೆ ಕಪ್ಪು ಶಾಹಿಯ ಸ್ಕೆಚ್ / ಮಾರ್ಕರ್ ಪೆನ್‌ರಲ್ಲಿ ಸಹಿಯನ್ನು ಮಾಡಿ ಇದನ್ನು ಸ್ಕಾನ್ ಮಾಡಿ ಅರ್ಜಿಗೆ UPLOAD ಮಾಡಬೇಕು. ON LINE ಮೂಲಕ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಕೋರಿರುವ ಮೀಸಲಾತಿ ಪ್ರಮಾಣ ಪತ್ರಗಳು ಮತ್ತು ಇತರೇ ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡಿರತಕ್ಕದು ಹಾಗೂ ಅದೇ ಮೀಸಲಾತಿ

ಪ್ರಮಾಣ ಪತ್ರದ ಹಾಗೂ ಇತರೆ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಸಂದರ್ಶನಕ್ಕೆ / ಮೂಲ ದಾಖಲಾತಿಗಳ ಪರಿಶೀಲನೆಗೆ ಅರ್ಹರಾದಾಗ ಸಂದರ್ಶನ ಸಮಯದಲ್ಲಿ/ ಮೂಲ ದಾಖಲಾತಿಗಳ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸಬೇಕು. ಇತರೆ ನಮೂನೆಗಳಲ್ಲಿ ಅಥವಾ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ತಪ್ಪಿದ್ದಲ್ಲಿ ಇವರ ಮೀಸಲಾತಿಯನ್ನು /ಅಭ್ಯರ್ಥಿತ್ವವನ್ನು ರದ್ದುಗೊಳಿಸಲಾಗುವುದು.

ಇತರೆ ನಮೂನೆಗಳಲ್ಲಿ ಅಥವಾ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

i) ಹುದ್ದೆಗೆ ನಿಗದಿಪಡಿಸಿದ ಶುಲ್ಕ(ಅರ್ಜಿಯನ್ನು ಭರ್ತಿ ಮಾಡಿದ ನಂತರ ಪಾವತಿಸತಕ್ಕದ್ದು) ಪಾವತಿ ರಸೀತಿ.

ii) ಹುದ್ದೆಗಳಿಗೆ ನಿಗದಿಪಡಿಸಲಾದ ವಿದ್ಯಾರ್ಹತೆಯ ಎಲ್ಲಾ ವರ್ಷಗಳ /ಸೆಮಿಸ್ಟರ್‌ಗಳ ಅಂಕಪಟ್ಟಿಗಳು ಹಾಗೂ ಘಟಿಕೋತ್ಸವದ ಪ್ರಮಾಣ ಪತ್ರಗಳು /ಗ್ರೇಡ್‌ನ್ನು ಶೇಕಡವಾರು ಅಂಕಗಳಿಗೆ ಪರಿವರ್ತಿಸಿದ ಪ್ರಮಾಣ ಪತ್ರ

iii) ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ /ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗ.

iv) ಹುದ್ದೆಗೆ ಅನುಭವ / ತರಬೇತಿ ನಿಗದಿಪಡಿಸಿದ್ದಲ್ಲಿ ಅದರ ಪ್ರಮಾಣ ಪತ್ರಗಳು

v) ಮಾಜಿ ಸೈನಿಕ ಮೀಸಲಾತಿ ಕೋರಿದ್ದಲ್ಲಿ ಸೈನಿಕ ಸೇವೆಯಿಂದ ಬಿಡುಗಡೆಯಾದ / ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮಾಜಿ ಸೈನಿಕರ ಅವಲಂಬಿತರು, ಮಾಜಿ ಸೈನಿಕರು ಸೇವೆಯಲ್ಲಿರುವಾಗ ಕೊಲ್ಲಲ್ಪಟ್ಟಿರುವ ಬಗ್ಗೆ/ ಶಾಶ್ವತ ಅಂಗವೈಕಲ್ಯ ಹೊಂದಿರುವ ಬಗೆಗಿನ ಪ್ರಮಾಣಪತ್ರ.) ಹಾಜರುಪಡಿಸಬೇಕು.

vi) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಮತ್ತು ಪ್ರವರ್ಗ–3ಬಿ ಮೀಸಲಾತಿ ಪ್ರಮಾಣ ಪತ್ರಗಳು ಪ್ರಸ್ತುತ ಚಾಲ್ತಿಯಲ್ಲಿರುವ ನಮೂನೆಗಳಲ್ಲಿ (ಮೀಸಲಾತಿ ಕೋರಿದ್ದಲ್ಲಿ)

vii) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)

viii) ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

ix) ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

x) ಯೋಜನೆಗಳಿಂದ ನಿರಾಶ್ರಿತರಾದ ಅಭ್ಯರ್ಥಿಯ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)

xi) ಸೇವಾನುಭವ ಪ್ರಮಾಣ ಪತ್ರಗಳು(ನಿಗದಿಪಡಿಸಿದಲ್ಲಿ)

(ಮೇಲಿನ ಕ್ರಮ ಸಂಖ್ಯೆ vi, vii, viii, ix ಮತ್ತು x ರ ಮೀಸಲಾತಿ ಪ್ರಮಾಣ ಪತ್ರಗಳ ನಮೂನೆಗಳನ್ನು ಅಭ್ಯರ್ಥಿಗಳ ಸೂಚನೆಗಳಲ್ಲಿ ತೋರಿಸಲಾಗಿದೆ. ನಿಗದಿಪಡಿಸಿದ ನಮೂನೆಗಳಲ್ಲಿ ಮೀಸಲಾತಿಯನ್ನು ಕೋರದೇ ಇತರೆ ನಮೂನೆಗಳಲ್ಲಿ ಕೋರಿದ್ದಲ್ಲಿ ಮೀಸಲಾತಿಯನ್ನು ತಿರಸ್ಕರಿಸಲಾಗುವುದು).

**ಭಾಗ–'ಬಿ'**

**(ವಿಶೇಷ ನೇಮಕಾತಿ ನಿಯಮಗಳು 2001ರನ್ವಯ ಭರ್ತಿ ಮಾಡಲಾಗುವ ಬ್ಯಾಕ್‌ಲಾಗ್ ಹುದ್ದೆಗಳು)**

**(ಈ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಯಾವುದೇ ಶುಲ್ಕವನ್ನು ಪಾವತಿಸುವಂತಿಲ್ಲ.)**

**(ಅ) ನೇಮಕಾತಿ ವಿಧಾನ:–** ಅಭ್ಯರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯನ್ನಾಗಲೀ ಅಥವಾ ಸಂದರ್ಶನವನ್ನಾಗಲೀ (Personality Test) ಎದುರಿಸಬೇಕಾಗಿರುವುದಿಲ್ಲ. ಕರ್ನಾಟಕ ರಾಜ್ಯ ನಾಗರೀಕ ಸೇವೆಗಳು(ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ತುಂಬದೇ ಇರುವ ಸ್ಥಾನಗಳು) (ವಿಶೇಷ ನೇಮಕಾತಿ) ನಿಯಮಗಳು 2001ರನ್ವಯ, ಆಯಾ ಹುದ್ದೆಗಳಿಗೆ ನಿಗದಿಪಡಿಸಿದ್ದ ವಿದ್ಯಾರ್ಹತೆಯಲ್ಲಿ ಅಭ್ಯರ್ಥಿಗಳು ಗಳಿಸಿದ್ದ ಒಟ್ಟು ಅಂಕಗಳ ಶೇಕಡಾವಾರನ್ನು ಆಧರಿಸಿ 18 ವರ್ಷದಿಂದ 28 ವರ್ಷ ವಯೋಮಿತಿಯುಳ್ಳ ಅಭ್ಯರ್ಥಿಗಳ ಒಂದು ಜ್ಯೇಷ್ಠತಾ ಪಟ್ಟಿಯನ್ನು ಹಾಗೂ 29 ವರ್ಷದಿಂದ 40 ವರ್ಷ ವಯೋಮಿತಿಯುಳ್ಳ ಅಭ್ಯರ್ಥಿಗಳ ಇನ್ನೊಂದು ಜ್ಯೇಷ್ಠತಾ ಪಟ್ಟಿಯನ್ನು ತಯಾರಿಸಿ ಇದರ ಆಧಾರದಂತೆ ಆಯ್ಕೆ ಮಾಡಲಾಗುವುದು. ಆಯ್ಕೆ ಮಾಡುವಾಗ 29 ವರ್ಷದಿಂದ 40 ವರ್ಷ ವಯೋಮಿತಿಯುಳ್ಳ ಅಭ್ಯರ್ಥಿಗಳ ಜ್ಯೇಷ್ಠತಾ ಪಟ್ಟಿಯಲ್ಲಿರುವವರಿಗೆ ಮೊದಲ ಆದ್ಯತೆ ನೀಡಲಾಗುವುದು.

**(ಆ) ಶೈಕ್ಷಣಿಕ ವಿದ್ಯಾರ್ಹತೆ:–** ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಆಯಾ ಹುದ್ದೆಯ ಮುಂದೆ ಸೂಚಿಸಿರುವ ಕನಿಷ್ಠ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು. ನಿಗದಿಪಡಿಸಿರುವ ವಿದ್ಯಾರ್ಹತೆಯನ್ನು ಹೊಂದದೇ, ಹೆಚ್ಚಿನ ವಿದ್ಯಾರ್ಹತೆಯನ್ನು ಹೊಂದಿದ್ದರೂ ಸಹ ಪರಿಗಣಿಸಲಾಗುವುದಿಲ್ಲ. ಸದರಿ ಹುದ್ದೆಗಳ ನೇಮಕಾತಿಯನ್ನು ನಿಯಮಗಳಲ್ಲಿ ನಿಗದಿಪಡಿಸಿರುವ ವಿದ್ಯಾರ್ಹತೆಯಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳ ಜ್ಯೇಷ್ಠತೆಯನುಸಾರ ಮಾಡಲಾಗುವುದರಿಂದ ಅಭ್ಯರ್ಥಿಗಳು ಅಂಕಗಳನ್ನು ಸ್ಪಷ್ಟವಾಗಿ ನಮೂದಿಸತಕ್ಕದ್ದು. ತಪ್ಪಿದ್ದಲ್ಲಿ ಆಯ್ಕೆಗೆ ಪರಿಗಣಿಸಲಾಗುವುದಿಲ್ಲ.

**(ಇ) ವಯೋಮಿತಿ:–** ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಗಳು ಕನಿಷ್ಠ 18 ವರ್ಷ ಹೊಂದಿರಬೇಕು. ಹಾಗೂ ಗರಿಷ್ಠ 40 ವರ್ಷ ವಯೋಮಿತಿಯನ್ನು ಮೀರಿರಬಾರದು. ನಿಯಮಗಳಲ್ಲಿ ವಯೋಮಿತಿ ಸಡಿಲಿಕೆಗೆ ಅವಕಾಶವಿರುವುದಿಲ್ಲ.

**(ಈ)ಪ್ರಮುಖವಾದ ಸೂಚನೆಗಳು:–**

ಅಭ್ಯರ್ಥಿಯ ಇತ್ತೀಚಿನ ಪಾಸ್ ಪೋರ್ಟ್ ಅಳತೆಯ ಭಾವಚಿತ್ರವನ್ನು ಒಂದು ಹಾಳೆಯ ಮೇಲಿಟ್ಟು ಅದರ ಕೆಳಗೆ ಕಪ್ಪು ಶಾಹಿಯ ಸ್ಕೆಚ್ / ಮಾರ್ಕರ್ ಪೆನ್‌ನಲ್ಲಿ ಸಹಿಯನ್ನು ಮಾಡಿ ಇದನ್ನು ಸ್ಕ್ಯಾನ್ ಮಾಡಿ ಅರ್ಜಿಗೆ UPLOAD ಮಾಡಬೇಕು. ON LINE ಮೂಲಕ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಕೋರಿರುವ ಮೀಸಲಾತಿ ಪ್ರಮಾಣ ಪತ್ರಗಳು ಮತ್ತು ಇತರೇ ಪ್ರಮಾಣ ಪತ್ರಗಳನ್ನು ಪಡೆದಿಟ್ಟುಕೊಂಡಿರತಕ್ಕದು ಹಾಗೂ ಅದೇ ಮೀಸಲಾತಿ ಪ್ರಮಾಣ ಪತ್ರದ ಹಾಗೂ ಇತರೆ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಮೂಲ ದಾಖಲಾತಿಗಳ ಪರಿಶೀಲನೆಗೆ ಅರ್ಹರಾದಾಗ ಮೂಲ ದಾಖಲಾತಿಗಳ ಪರಿಶೀಲನೆಯ ಸಮಯದಲ್ಲಿ ಹಾಜರುಪಡಿಸಬೇಕು. ಇತರೆ ನಮೂನೆಗಳಲ್ಲಿ ಅಥವಾ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ತಪ್ಪಿದ್ದಲ್ಲಿ ಇವರ ಮೀಸಲಾತಿಯನ್ನು /ಅಭ್ಯರ್ಥಿತ್ವವನ್ನು ರದ್ದುಗೊಳಿಸಲಾಗುವುದು.

ಇತರೆ ನಮೂನೆಗಳಲ್ಲಿ ಅಥವಾ ಅರ್ಜಿ ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಪಡೆದ ಯಾವುದೇ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ.

ಮೂಲ ದಾಖಲಾತಿಗಳ ಪರಿಶೀಲನೆ ಸಮಯದಲ್ಲಿ ಹಾಜರುಪಡಿಸಬೇಕಾದ ಪ್ರಮಾಣ ಪತ್ರಗಳು:

1) ಅಭ್ಯರ್ಥಿಗಳು ಅವರ ವಯೋಮಿತಿಗೆ ಸಂಬಂಧಿಸಿದ ಎಸ್.ಎಸ್.ಎಲ್.ಸಿ. ಪ್ರಮಾಣ ಪತ್ರ/ವರ್ಗಾವಣೆ ಪ್ರಮಾಣಪತ್ರ/ಕ್ಯುಮುಲೇಟಿವ್ ರೆಕಾರ್ಡ್‌ನ ಉದ್ಧೃತ ಭಾಗ.

2) ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಗೆ ಸಂಬಂಧಿಸಿದ ಘಟಿಕೋತ್ಸವ ಪ್ರಮಾಣಪತ್ರ, ಎಲ್ಲಾ ವರ್ಷಗಳ/ ಸೆಮಿಸ್ಟರ್‌ಗಳ ಅಂಕಪಟ್ಟಿಗಳು, ಗ್ರೇಡ್ ಅಂಕಗಳು ಇದ್ದಲ್ಲಿ ವಿಶ್ವವಿದ್ಯಾಲಯದಿಂದ ಗ್ರೇಡ್ ಅಂಕಗಳನ್ನು ಶೇಕಡಾವಾರಿಗೆ ಪರಿವರ್ತಿಸಿದ ಪ್ರಮಾಣಪತ್ರ,

3) ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಮೀಸಲಾತಿ ಪ್ರಮಾಣಪತ್ರಗಳು ನಮೂನೆ–'ಡಿ'ನಲ್ಲಿ,

4) ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–2ರಲ್ಲಿ.

5) ಸ್ಪಷ್ಟವಾಗಿ ಸೇವಾವಧಿ/ಸೇವೆಯ ಸ್ಥಳ ನಮೂದಿಸಲಾದ ಸೇವಾನುಭವ ಪ್ರಮಾಣ ಪತ್ರಗಳು.

6) ಇನ್‌ಟರ್ನ್‌ಷಿಪ್ ಪೂರ್ಣಗೊಳಿಸಿದ ಪ್ರಮಾಣ ಪತ್ರ / ಕೆಎಂಸಿ ನೋಂದಣಿ ಪ್ರಮಾಣ ಪತ್ರ ಕಡ್ಡಾಯವಾಗಿ ಹಾಜರುಪಡಿಸಬೇಕು.(ಸಹಾಯಕ ಶಸ್ತ್ರ ಚಿಕಿತ್ಸಕರ[ಅರವಳಿಕೆ ತಜ್ಞರು] ಹುದ್ದೆಗೆ)

7) ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅವರ ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣಾ ಪ್ರಮಾಣ ಪತ್ರ.

**15. ವಿಶೇಷ ಸೂಚನೆಗಳು:–**

(1) ON LINE ಮೂಲಕ ಅರ್ಜಿ ಸಲ್ಲಿಸುವಾಗ ಎಲ್ಲಾ ಮಾಹಿತಿಗಳನ್ನು ಸರಿಯಾಗಿ ಭರ್ತಿ ಮಾಡಿರುವ ಬಗ್ಗೆ ಖಚಿತಪಡಿಸಿಕೊಂಡು ನಂತರ ಅದರ ಒಂದು ಪ್ರತಿಯನ್ನು ಡೌನ್‌ಲೋಡ್ ಮಾಡಿಕೊಂಡು ನೇಮಕಾತಿ ಪ್ರಕ್ರಿಯೆ ಮುಗಿಯುವವರೆಗೂ ಭದ್ರವಾಗಿ ತೆಗೆದಿಟ್ಟುಕೊಂಡಿರತಕ್ಕದ್ದು.

(2) ಈಗಾಗಲೇ ಸೇವೆಯಲ್ಲಿರುವ / ಸೇವೆ ಸಲ್ಲಿಸಿದ ಅಭ್ಯರ್ಥಿಗಳು ಅವರುಗಳ ನೇಮಕಾತಿ ಪ್ರಾಧಿಕಾರಿಗಳಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಅನುಮತಿಯನ್ನು ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ವಿವರಗಳನ್ನು ಅರ್ಜಿಯಲ್ಲಿ ನಮೂದಿಸತಕ್ಕದ್ದು. ಆಯೋಗವು ಸೂಚಿಸಿದಾಗ ಇದರ ಮೂಲ ಪ್ರತಿಯನ್ನು ಪರಿಶೀಲನೆಗೆ ಹಾಜರುಪಡಿಸತಕ್ಕದ್ದು.

(3) ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕವಾಗುವುದು.

**16. ದುರ್ನಡತೆ:–**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವೆನೆಂದು ಅಥವಾ ನೇಮಕಾತಿ ಉದ್ದೇಶಗಳಿಗಾಗಿ ನಡೆಸಲಾದ ಪರೀಕ್ಷೆಯಲ್ಲಿ / ಸಂದರ್ಶನದಲ್ಲಿ ಅನುಚಿತ ಮಾರ್ಗವನ್ನು ಅನುಸರಿಸುತ್ತಿರುವನೆಂದು ಅಥವಾ ಅನುಸರಿಸಲು ಪ್ರಯತ್ನಿಸಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವನೆಂದು, ಕಂಡುಬಂದಲ್ಲಿ ಅವನು / ಅವಳು ಸ್ವತ: ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ; ಹುದ್ದೆಯ ಸಂದರ್ಶನದಿಂದ / ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

ಕಾರ್ಯದರ್ಶಿ,

ಕರ್ನಾಟಕ ಲೋಕ ಸೇವಾ ಆಯೋಗ.

**ಅನುಸೂಚಿ**

**ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 1 ಆರ್‌ಟಿ(4)ಬಿ–1/2011 ದಿನಾಂಕ: 06–06–2011**

**ಅರ್ಜಿಗಳನ್ನು ಭರ್ತಿ ಮಾಡಲು ಕೊನೆಯ ದಿನಾಂಕ: 11–07–2011 ಸಂಜೆ 5.30 ಗಂಟೆ ಹಾಗೂ ಶುಲ್ಕ ಪಾವತಿಸಲು ಕೊನೆಯ ದಿನಾಂಕ: 12–07–2011 ಬ್ಯಾಂಕಿನ ವೇಳೆಯೊಳಗೆ**

**ಭಾಗ–ಎ(ತಾಂತ್ರಿಕೇತರ ಹುದ್ದೆಗಳು)**

| ಹುದ್ದೆಗಳ ಅನುಕ್ರಮ ಸಂಖ್ಯೆ | ಹುದ್ದೆಯ ಸಂಕೇತ/ POST CODE | ಇಲಾಖೆಯ ಹೆಸರು ಹುದ್ದೆಯ ಪದನಾಮ ಮತ್ತು ಸಂಖ್ಯೆ | ವೇತನ ಶ್ರೇಣಿ | ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ | ವಯೋಮಿತಿ (ವಯಸ್ಸು ವರ್ಷಗಳಲ್ಲಿ) | ಹುದ್ದೆಗಳ ವರ್ಗೀಕರಣ |
|---|---|---|---|---|---|---|
| (1) | (2) | (3) | (4) | (5) | (6) | (7) |
| | | | **ಗ್ರೂಪ್– ' ಬಿ ' ಹುದ್ದೆಗಳು** | | | |
| 01–02 | (01) | ಸಾರಿಗೆ ಇಲಾಖೆಯಲ್ಲಿನ ಸಹಾಯಕ ಕಾನೂನು ಅಧಿಕಾರಿ–02 ಹುದ್ದೆಗಳು<br>Asst. Law Officer in Transport Dept.-02 posts | ₹.11,400-21,600 | 1)Must be holder of a Degree in Law of a University established by Law in India.<br>2) Must be a person practicing as an Advocate for a period of not less than five years in Courts of Civil and Criminal Jurisdiction.<br>ಟಿಪ್ಪಣಿ: (i) ಅಭ್ಯರ್ಥಿಯು ವಕೀಲರಾಗಿ ಯಾವ ವಕೀಲರ ಸಂಘದಲ್ಲಿ ಸದಸ್ಯರಾಗಿದ್ದಾರೋ, ಆ ಸಂಘದಿಂದ ಅವರು ವಕೀಲರಾಗಿ 5 ವರ್ಷಗಳ ಸೇವಾನುಭವ ಹೊಂದಿದ ಕುರಿತು ಪ್ರಮಾಣ ಪತ್ರವನ್ನು ಪಡೆದುಕೊಳ್ಳಬಹುದು.<br>(ii) ಅಭ್ಯರ್ಥಿಯು ಕಿರಿಯ ವಕೀಲನಾಗಿ ಹಿರಿಯ ವಕೀಲರಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಲ್ಲಿ, ಸೇವಾನುಭವದ ಕುರಿತು ಅವರ ಹಿರಿಯ ವಕೀಲರ ಪ್ರಮಾಣಪತ್ರವನ್ನು ಪಡೆದುಕೊಳ್ಳಬಹುದು.<br>(iii) ಅಭ್ಯರ್ಥಿಯು ಯಾವ ನ್ಯಾಯಾಲಯದಲ್ಲಿ ತನ್ನ ವಕೀಲರ ವೃತ್ತಿಯನ್ನು ನಡೆಸುತ್ತಿದ್ದಾರೋ, ಅಂತಹ ನ್ಯಾಯಾಲಯದ ನ್ಯಾಯಾಧೀಶರಿಂದ ಸೇವಾನುಭವದ ಕುರಿತು ಪ್ರಮಾಣ ಪತ್ರವನ್ನು ಪಡೆದುಕೊಳ್ಳಬಹುದಾಗಿರುತ್ತದೆ. | ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ – 38<br>ಪ.ಜಾ, ಪ.ಪಂ, ಪ್ರ 1 – 40 | ಪರಿಶಿಷ್ಟ ಜಾತಿ(ಇತರೆ) – 01 ಹುದ್ದೆ<br>ಸಾಮಾನ್ಯ ಅರ್ಹತೆ (ಇತರೆ) – 01 ಹುದ್ದೆ |

<table>
<tr><th>ಹುದ್ದೆಗಳ ಅನುಕ್ರಮ ಸಂಖ್ಯೆ</th><th>ಹುದ್ದೆಯ ಸಂಕೇತ/ POST CODE</th><th>ಇಲಾಖೆಯ ಹೆಸರು ಹುದ್ದೆಯ ಪದನಾಮ ಮತ್ತು ಸಂಖ್ಯೆ</th><th>ವೇತನ ಶ್ರೇಣಿ</th><th>ಹುದ್ದೆಗೆ ನಿಗದಿಪಡಿಸಲಾದ ವಿದ್ಯಾರ್ಹತೆ</th><th>ವಯೋಮಿತಿ (ವಯಸ್ಸು ವರ್ಷಗಳಲ್ಲಿ)</th><th>ಹುದ್ದೆಗಳ ವರ್ಗೀಕರಣ</th></tr>
<tr><td>(1)</td><td>(2)</td><td>(3)</td><td>(4)</td><td>(5)</td><td>(6)</td><td>(7)</td></tr>
<tr><td colspan="7">ಗ್ರೂಪ್– ‘ ಸಿ ’ ಹುದ್ದೆಗಳು</td></tr>
<tr><td>03-56</td><td>(02)</td><td>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಪರಿವೀಕ್ಷಣಾಧಿಕಾರಿ ದರ್ಜೆ–2<br>–54 ಹುದ್ದೆಗಳು<br>Probationery Officer Gr-2 in the Department of Women and Child Development-54 Posts.</td><td>₹.10,000-18150</td><td>Must be holder of a (i) Bachelor’s Degree in Social Work or any graduate with Master’s Degree in Social Work; OR (ii)M.Sc. (Home Science) with specialisation in Nutrition or Child Development; OR (iii) M.A. in Psychology with Child Development Specialisation.</td><td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ – 38<br>ಪ.ಜಾ, ಪ.ಪಂ, ಪ್ರ 1 – 40</td><td>
<table>
<tr><th>ಮೀಸಲಾತಿ</th><th>ಇತರೆ</th><th>ಮ</th><th>ಗ್ರಾ</th><th>ಮಾ.ಸೈ.</th><th>ಕಮಾಅ</th><th>ಯೋನಿ</th><th>ಒಟ್ಟು</th></tr>
<tr><td>ಪ.ಜಾ</td><td>02</td><td>02</td><td>02</td><td>01</td><td>01</td><td>–</td><td>08</td></tr>
<tr><td>ಪ.ಪಂ</td><td>–</td><td>01</td><td>01</td><td>–</td><td>–</td><td>–</td><td>02</td></tr>
<tr><td>ಪ್ರ.1</td><td>01</td><td>–</td><td>01</td><td>–</td><td>–</td><td>–</td><td>02</td></tr>
<tr><td>ಪ್ರ.2(ಎ)</td><td>02</td><td>02</td><td>02</td><td>01</td><td>01</td><td>–</td><td>08</td></tr>
<tr><td>ಪ್ರ.2(ಬಿ)</td><td>01</td><td>–</td><td>01</td><td>–</td><td>–</td><td>–</td><td>02</td></tr>
<tr><td>ಪ್ರ.3(ಎ)</td><td>–</td><td>01</td><td>01</td><td>–</td><td>–</td><td>–</td><td>02</td></tr>
<tr><td>ಪ್ರ.3(ಬಿ)</td><td>01</td><td>01</td><td>01</td><td>–</td><td>–</td><td>–</td><td>03</td></tr>
<tr><td>ಸಾ.ಅ</td><td>07</td><td>08</td><td>07</td><td>03</td><td>01</td><td>01</td><td>27</td></tr>
<tr><td>ಒಟ್ಟು</td><td>14</td><td>15</td><td>16</td><td>05</td><td>03</td><td>01</td><td>54</td></tr>
</table>
</td></tr>
<tr><td>57-71</td><td>(03)</td><td>ಕಾನೂನು ಮಾಪನಶಾಸ್ತ್ರ ಇಲಾಖೆಯಲ್ಲಿ ಕಾನೂನು ಮಾಪನಶಾಸ್ತ್ರ ನಿರೀಕ್ಷಕರು–15 ಹುದ್ದೆಗಳು<br>Legal Metrology (Weights and Measures) Inspector in the Dept. of Legal Metrology-15 Posts</td><td>₹.8825-16000</td><td>Must be holder of a Degree in Science with Physics as one of the subjects or Engineering of a recognized University or a Diploma in Mechanical or Electrical Engineering granted by the recognized Board of Technical Education.</td><td>ಕನಿಷ್ಠ – 18<br>ಗರಿಷ್ಠ – 35<br>ಪ್ರ. 2ಎ, ಪ್ರ 2ಬಿ, ಪ್ರ 3ಎ, ಪ್ರ 3ಬಿ – 38<br>ಪ.ಜಾ, ಪ.ಪಂ, ಪ್ರ 1 – 40</td><td>
<table>
<tr><th>ಮೀಸಲಾತಿ</th><th>ಇತರೆ</th><th>ಮ</th><th>ಗ್ರಾ</th><th>ಮಾ.ಸೈ.</th><th>ಒಟ್ಟು</th></tr>
<tr><td>ಪ.ಜಾ</td><td>01</td><td>–</td><td>01</td><td>01</td><td>03</td></tr>
<tr><td>ಪ್ರ.1</td><td>–</td><td>–</td><td>01</td><td>–</td><td>01</td></tr>
<tr><td>ಪ್ರ.2(ಎ)</td><td>–</td><td>–</td><td>01</td><td>01</td><td>02</td></tr>
<tr><td>ಪ್ರ.2(ಬಿ)</td><td>–</td><td>–</td><td>01</td><td>–</td><td>01</td></tr>
<tr><td>ಪ್ರ.3(ಬಿ)</td><td>–</td><td>–</td><td>01</td><td>–</td><td>01</td></tr>
<tr><td>ಸಾ.ಅ</td><td>02</td><td>02</td><td>02</td><td>01</td><td>07</td></tr>
<tr><td>ಒಟ್ಟು</td><td>03</td><td>02</td><td>07</td><td>03</td><td>15</td></tr>
</table>
</td></tr>
</table>

